

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಮುನಿರಾಜು ಗೌಡ ಪಿ.ಎಂ. (ವಿಧಾನ ಸಭೆಯಿಂದ ಚುನಾಯಿತರಾದವರು) |
| ಚುಕ್ಕೆಗುರುತಿನ ಪ್ರಶ್ನೆ ಸಂಖ್ಯೆ | : | 1969 |
| ಉತ್ತರಿಸಬೇಕಾದ ದಿನಾಂಕ | : | 16.03.2022. |
| ಉತ್ತರಿಸಬೇಕಾದ ಸಚಿವರು | : | ಮಾನ್ಯ ಪಶುಸಂಗೋಪನೆ ಸಚಿವರು. |

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಬೇರೆ ಬೇರೆ ಕಾರಣಗಳಿಂದ ಗಾಯಗೊಳ್ಳುವ ಮತ್ತು ರೋಗ ರುಜಿನಗಳಿಗೆ ತುತ್ತಾಗುವ ಪಶುಗಳ ಸಂರಕ್ಷಣೆಗಾಗಿ ಸರ್ಕಾರದ ವತಿಯಿಂದ ಗೋರಕ್ಷಣೆ ಆಂಬ್ಯುಲೆನ್ಸ್ ಗಳನ್ನು ಈಗಾಗಲೇ ಒದಗಿಸಲಾಗಿದೆಯೇ; | 2019-20ನೇ ಸಾಲಿನಲ್ಲಿ ಪಶುಸಂಜೀವಿನಿ ಯೋಜನೆಯಡಿ 15 ಆಂಬ್ಯುಲೆನ್ಸ್ ಗಳನ್ನು ರಾಜ್ಯದ ಅನುದಾನದಲ್ಲಿ ಖರೀದಿಸಿ 15 ಜಿಲ್ಲೆಗಳ ಪಾಲಿಕ್ಲಿನಿಕ್ ಸಂಸ್ಥೆಗಳಿಗೆ ಈಗಾಗಲೇ ಒದಗಿಸಲಾಗಿದೆ.<br><br>2021-22 ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಜಾನುವಾರು ಆರೋಗ್ಯ ಮತ್ತು ರೋಗ ನಿಯಂತ್ರಣ ಯೋಜನೆಯಡಿ ಪ್ರತಿ ಒಂದು ಲಕ್ಷ ಜಾನುವಾರುಗಳಿಗೆ ಒಂದರಂತೆ ಒಟ್ಟು 275 ಸುಸ್ಸಜಿತ ಸಂಚಾರಿ ಪಶುಚಿಕಿತ್ಸಾ ವಾಹನಗಳನ್ನು ಖರೀದಿಸುವ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಆ | ಒದಗಿಸಲಾಗಿದ್ದಲ್ಲಿ, ಒಟ್ಟು ಎಷ್ಟು ಆಂಬ್ಯುಲೆನ್ಸ್ ಗಳು ಎಲ್ಲೆಲ್ಲಿ ಕಾರ್ಯಾಚರಣೆ ಮಾಡುತ್ತಿವೆ; | ಒಟ್ಟು 15 ಆಂಬ್ಯುಲೆನ್ಸ್ ಗಳನ್ನು ಈಗಾಗಲೇ ಒದಗಿಸಲಾಗಿದ್ದು, ಸದರಿ ವಾಹನಗಳು ಉಪ ನಿರ್ದೇಶಕರು, ಪಾಲಿಕ್ಲಿನಿಕ್, ಪಶುಪಾಲನೆ ಮತ್ತು ಪಶುವೈದ್ಯಕೀಯ ಸೇವಾ ಇಲಾಖೆ, ಬೀದರ್, ರಾಯಚೂರು, ಕಲಬುರಗಿ, ಯಾದಗಿರಿ, ಧಾರವಾಡ, ವಿಜಯಪುರ(ಬಿಜಾಪುರ), ಬೆಳಗಾವಿ, ದಕ್ಷಿಣ ಕನ್ನಡ, ಹಾಸನ, ಮಂಡ್ಯ, ಮೈಸೂರು, ಶಿವಮೊಗ್ಗ, ಚಿತ್ರದುರ್ಗ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿವೆ.<br><br>ಪ್ರತಿ ಒಂದು ಲಕ್ಷ ಜಾನುವಾರುಗಳಿಗೆ ಒಂದರಂತೆ ಒಟ್ಟು 275 ಸುಸ್ಸಜಿತ ಸಂಚಾರಿ ಪಶುಚಿಕಿತ್ಸಾ ವಾಹನಗಳನ್ನು ಖರೀದಿಸುವ ಪ್ರಕ್ರಿಯೆ ಪ್ರಗತಿಯಲ್ಲಿರುತ್ತದೆ. |
| ಇ | ಈ ಆಂಬ್ಯುಲೆನ್ಸ್ ನಲ್ಲಿ ಯಾವ ಯಾವ ಸೌಲಭ್ಯಗಳು ಇರುತ್ತವೆ: (ಸಂಕ್ಷಿಪ್ತ ವಿವರ ನೀಡುವುದು) | ಆಂಬ್ಯುಲೆನ್ಸ್ ನಲ್ಲಿ ಈ ಕೆಳಕಂಡ ಸೌಲಭ್ಯಗಳು ಇರುತ್ತವೆ;<br>1. DOG/CAT CATCHING EQUIPEMENTS.<br>2. ARTIFICIAL INSEMINATION CONTAINER<br>3. NAIL CUTTER.<br>4. MEDICEN BOX<br>5. ORTHOPEDIC TOOLS KIT<br>6. PM/BONE CUTTER BATTERY OPERATED WITH SS BLADES SET OF4. |

| | | |
|---|---|---|
| | | 7. EMERGENCY DRUG KIT.<br>8. MICRO ELECTROCAUTARY WITH SET OF 6 MICRO TIPS SET.<br>9. STOMACH TUBE SET OF 3 FOR LARGE ANIMALS.<br>10. FIRE EXTINGUISHER.<br>11. SURGICAL KIT FOR MINOR AND MAJOR SURGERY<br>12. OBSTRETICAL KIT |
| ಈ | ಈ ಆಂಬ್ಯುಲೆನ್ಸ್ ಗಳ ಖರೀದಿಗೆ ಖರ್ಚಾದ ಒಟ್ಟು ವೆಚ್ಚವೆಷ್ಟು; | ಪಶುಸಂಜೀವಿನಿ ಯೋಜನೆಯಡಿ ರಾಜ್ಯದ ಅನುದಾನದಿಂದ 15 ಆಂಬ್ಯುಲೆನ್ಸ್ ಗಳ ಖರೀದಿಗೆ ಖರ್ಚಾದ ಒಟ್ಟು ವೆಚ್ಚ ರೂ.221.23 ಲಕ್ಷಗಳು<br><br>2021-22 ನೇ ಸಾಲಿನಲ್ಲಿ ಕೇಂದ್ರ ಸರ್ಕಾರದ ಜಾನುವಾರು ಆರೋಗ್ಯ ಮತ್ತು ರೋಗ ನಿಯಂತ್ರಣ ಯೋಜನೆಯಡಿ 275 ವಾಹನಗಳನ್ನು ಖರೀದಿಸಲು ಶೇಕಡ 100 ರಷ್ಟು ಕೇಂದ್ರದ ಅನುದಾನ ರೂ.4383.80 ಲಕ್ಷಗಳು ವೆಚ್ಚವಾಗಿರುತ್ತವೆ. |
| ಉ | ಈ ವೆಚ್ಚವನ್ನು ಯಾವ ಅನುದಾನದಡಿಯಲ್ಲಿ ಭರಿಸಲಾಗುತ್ತದೆ? | 15 ವಾಹನಗಳ ಖರೀದಿಗೆ ತಗಲುವ ಅನುದಾನವನ್ನು 2019-20 ನೇ ಸಾಲಿನ ರಾಜ್ಯದ ಅನುದಾನದಲ್ಲಿ ಲೆಕ್ಕಶೀರ್ಷಿಕೆ: 2403-00-001-0-01, ರ ಉದ್ದೇಶಿತ ಶೀರ್ಷಿಕೆ 132 ರಲ್ಲಿ ಭರಿಸಲಾಗಿದೆ.<br><br>275 ವಾಹನಗಳ ಖರೀದಿಗೆ ಕೇಂದ್ರ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನದಲ್ಲಿ ಭರಿಸಲಾಗಿದೆ. |

**ಪಸಂಮೀ ಇ-79 ಸಲೆವಿ 2022**

(ಪ್ರಭು ಬಿ. ಚವ್ಹಾಣ್)
ಪಶುಸಂಗೋಪನೆ ಸಚಿವರು